# ಕಲಾ

ವೈಚಾರಿಕ
ಸಾಹಿತ್ಯ-ಚಿತ್ರ
ಸಂಪುಟ **6**

## ಕಲಾ ಸಂಚಾರ

ಪ್ರಧಾನ ಸಂಪಾದಕರು

**ಡಾ. ಎಂ.ಎಸ್. ಮೂರ್ತಿ**

ಸಂಪಾದಕರು

**ರಾಜು ಮಳವಳ್ಳಿ**

**ಕರ್ನಾಟಕ ಲಲಿತಕಲಾ ಅಕಾಡೆಮಿ**
ಕನ್ನಡ ಭವನ, ಎರಡನೇ ಮಹಡಿ
ಜೆ.ಸಿ.ರಸ್ತೆ, ಬೆಂಗಳೂರು-೫೬೦ ೦೦೨
ದೂರವಾಣಿ:೦೮೦-೨೨೪೮೦೨೯೭
ಈ-ಮೇಲ್: kla.karnataka@gmail.com
www.lalitkalakarnataka.org/karnataka lalithakala academy

# ಕಲಾ

ವೈಚಾರಿಕ ಸಾಹಿತ್ಯ–ಚಿತ್ರ ಸಂಪುಟ 6

ಕಲಾ ಸಂಚಾರ

ಸಂಚಿಕೆಯ ಸಂಪಾದನೆ: **ರಾಜು ಮಳವಳ್ಳಿ**

ಪ್ರಧಾನ ಸಂಪಾದಕರು: **ಡಾ.ಎಂ.ಎಸ್.ಮೂರ್ತಿ**

ಮೊದಲ ಮುದ್ರಣ: ಜೂನ್–2017

ಪುಟಗಳು : 124 + 4

ಬೆಲೆ : ರೂ. 200/-

ಪ್ರತಿಗಳು: 1,000

ಮುಖಪುಟ ಚಿತ್ರಕೃತಿ ಕೃಪೆ: **ಜಯವಂತ್ ಶೆಟ್ಟಿಗಾರ್**



ಬಳಸಿದ ಕಾಗದ : 80 ಜಿಎಸ್‌ಎಂ ಎನ್‌ಎಸ್ ಬುಕ್ ಪ್ರಿಂಟ್

ಪ್ರಕಾಶಕರು

**ಇಂದ್ರಮ್ಮ ಹೆಚ್.ವಿ.**

ರಿಜಿಸ್ಟ್ರಾರ್

**ಕರ್ನಾಟಕ ಲಲಿತಕಲಾ ಅಕಾಡೆಮಿ**

ಕನ್ನಡ ಭವನ, ಎರಡನೇ ಮಹಡಿ

ಜೆ.ಸಿ. ರಸ್ತೆ, ಬೆಂಗಳೂರು–560 002

ದೂರವಾಣಿ : 080–22480297

**ಈ–ಮೇಲ್** : kla.karnataka@gmail.com

www.lalitkalakarnataka.org /

karnataka lalitha kala academy

**ಪ್ರಕಟಣಾ ಸಮಿತಿ**

ಶ್ರೀ ಕೆ.ವಿ.ಸುಬ್ರಮಣ್ಯಂ

ಶ್ರೀ ರಾಜು ಮಳವಳ್ಳಿ

ಶ್ರೀ ಬಾಗೂರು ಮಾರ್ಕಂಡೇಯ

ಶ್ರೀ ಬಿ.ಎಲ್.ಚವ್ಹಾಣ್

ಮುದ್ರಕರು

**ರಶ್ಮಿ ಪ್ರಿಂಟರ್ಸ್**

ಸುಧಾಮನಗರ, ಬೆಂಗಳೂರು–560 027

ದೂರವಾಣಿ : 080–41203465

**KALA CHITRA SAMPUTA 6**

Edited by: **Raju Malavalli**

Chief Editor: **Dr.M.S.Murthy**

Published by

**Indramma.H.V**

Registrar

**Karnataka Lalitha Kala Academy,**

2nd Floor, Kannada Bhavana,

J.C.Road, Bengaluru-560 002,

Ph:080-22480297

**Email :** kla.karnataka@gmail.com

www.lalitkalakarnataka.org/

karnataka lalithakala academy

First Edition: 2017



Pages: 124 + 4

Price: **Rs. 200/-**

Used Paper: 80 gsm NS Book Print

Copies: 1000

*Printed at*

**Rashmi Printers**

Sudhamanagar, Bengaluru-560 027

Ph. 080-41203465

## ಪ್ರಧಾನ ಸಂಪಾದಕರ ನುಡಿ



# ನಮ್ಮೊಳಗಿನ ಅಂತರಂಗದ 'ಕಲಾಸಂಚಾರ'

ಲಲಿತಕಲಾ ಅಕಾಡೆಮಿಯ 50ನೇ ವರ್ಷದ 'ಸುವರ್ಣ ಸಂಭ್ರಮ'ದ ಸಂದರ್ಭದಲ್ಲಿ ಅನೇಕ ಹೊಸ ಯೋಜನೆಗಳನ್ನು ದೃಶ್ಯಕಲೆಯ ಪುನಃಶ್ಚೇತನಗೊಳಿಸುವ ಉದ್ದೇಶದಿಂದ ರೂಪಿಸಿದ್ದೇವೆ.

ಕಲಾ ಚಿಂತನೆ ಕುರಿತು ನಡೆದ ವಿಚಾರಸಂಕಿರಣಗಳು ರಾಜ್ಯದ ಎಲ್ಲಾ ಕಲಾವಿದರನ್ನು ಒಗ್ಗೂಡಿಸುವ, ಮುಕ್ತ ಚರ್ಚೆಗೆ ಅವಕಾಶ ಕಲ್ಪಿಸುವ ಮೊತ್ತ ಮೊದಲ ವೇದಿಕೆಯಾಗಿ ಕಲಾವಿದರ ಪರಸ್ಪರ ಬೆಳವಣಿಗೆಗೆ ಸಹಕಾರಿಯಾಗಿದೆ. ರೇಖಾಚಿತ್ರಗಳ ಮಹತ್ವ, ಕಲಾ ಸಾಹಿತ್ಯ ಮತ್ತು ವಿಮರ್ಶೆ, ದೃಶ್ಯಕಲೆ–ಶಿಕ್ಷಣ ಮತ್ತು ಸಂಶೋಧನೆ, ಕಲಾಚಿಂತನೆಗಳಂತಹ ಮಹತ್ವದ ವಿಷಯಗಳ ಕುರಿತ ವಿಚಾರಸಂಕಿರಣಗಳಲ್ಲಿ ರಾಜ್ಯದ ಕಲಾವಿದರು ಕಲಾಚಿಂತನೆಯ ಪ್ರಬಂಧಗಳನ್ನು, ಅಭಿಪ್ರಾಯಗಳನ್ನು ಮಂಡಿಸಿದ್ದಾರೆ. ಚಾರಿತ್ರಿಕವಾದ ಈ ಎಲ್ಲಾ ಲೇಖನಗಳನ್ನು ಕಲಾ–ವೈಚಾರಿಕ ಸಾಹಿತ್ಯ ಚಿತ್ರ ಸಂಪುಟಗಳಲ್ಲಿ ವಿಶೇಷವಾಗಿ ದಾಖಲಿಸಿದೆ. ಒಟ್ಟು ಐದು ಸಂಪುಟಗಳ ಈ ಪುಸ್ತಕಗಳು ನಮ್ಮ ಈ ಕಲಾ ಸಂದರ್ಭದ ಮಹತ್ವದ ಚಾರಿತ್ರಿಕ ದಾಖಲೆಗಳು.

ಕಲಾ ಸಂಚಾರ-ಎಂಬ ಯೋಜನೆಯೂ ಕೂಡ ಇಂತಹುದೇ ಒಂದು ದೂರದೃಷ್ಟಿಯ ಪ್ರಪ್ರಥಮ ಹೊಸ ಪ್ರಯೋಗ ಯಶಸ್ವಿಯಾಗಿ ಪ್ರಾರಂಭವಾಗಿದೆ. ದೇಶದ ನಾಲ್ಕು ದಿಕ್ಕಿಗೂ ಕಲಾವಿದರು ಸಂಚರಿಸಿ ನಮ್ಮ ಪರಂಪರೆಯನ್ನು ಅವಲೋಕಿಸಿದ್ದಾರೆ. ಸಾವಿರಾರು ವರ್ಷಗಳ ಹಿಂದಿನ ಕಲಾಕೃತಿಗಳ ಭವ್ಯತೆಯನ್ನು ತಮ್ಮ 'ರೇಖಾಚಿತ್ರ' ಗಳ ಮೂಲಕ ದಾಖಲಿಸಿದ್ದಾರೆ. ರಾಜ್ಯದ ಸುಮಾರು 50 ಕಲಾವಿದರು ಭಾರತದ ಉತ್ತರ, ದಕ್ಷಿಣ, ಪೂರ್ವ, ಪಶ್ಚಿಮ ಭಾಗಗಳಲ್ಲಿ ಉದಾತ್ತ ಕಲಾಪ್ರಕಾರ, ಪ್ರಾಚೀನ ಕಲಾವಿದರ ನಿಷ್ಠೆ, ಬದ್ಧತೆ ಮತ್ತು ಅನನ್ಯತೆಯ ಪ್ರತ್ಯಕ್ಷ ಅನುಭವಕ್ಕೆ ತೆರೆದುಕೊಂಡಿದ್ದಾರೆ.

ರಾಷ್ಟ್ರ, ಅಂತಾರಾಷ್ಟ್ರೀಯ ಕಲಾಪ್ರತಿಷ್ಠೆಗೆ ಒಡ್ಡಿಕೊಳ್ಳುವ ಮುನ್ನ ಕಾಲಬುಡದ ಸಂಸ್ಕೃತಿಯನ್ನು, ದೇಸಿ ಪರಂಪರೆಯನ್ನು ಅರಿಯುವುದು ಒಬ್ಬ ಕಲಾವಿದ ಪರಿಪೂರ್ಣತೆಯತ್ತ ಸಾಗುತ್ತಿರುವ ಲಕ್ಷಣ. 'ಆಕಾಶಕ್ಕೆ ಜಿಗಿಯುವ ಮೊದಲು ನಿಂತ ನೆಲಕ್ಕೆ ಕಾಲೂರಬೇಕು'. ದೃಶ್ಯಕಲೆಯ ಈ ಹೊತ್ತಿನ ಆಧುನಿಕ ಚಿಂತನೆ, ಆಲೋಚನಾಕ್ರಮ, ಅವಿಷ್ಕಾರಗಳ ಸಂದರ್ಭದಲ್ಲಿ ನಾಡು, ಸಂಸ್ಕೃತಿ, ಜನಪದ ಆಚರಣೆಗಳು, ನಂಬಿಕೆಗಳನ್ನು ಸ್ಪಷ್ಟವಾಗಿ ತಿಳಿದುಕೊಳ್ಳುವುದು, ಈ ತಿಳುವಳಿಕೆಯಿಂದ ಪಡೆದ ಅರಿವನ್ನು ಪರಿಷ್ಕರಣೆಗೆ ಒಳಪಡಿಸಿದ ಪ್ರಕ್ರಿಯೆಯ ನಂತರ ನಮ್ಮ 'ಕಲಾ-ಕೃತಿ'ಗೆ ಮೂಲದ್ರವ್ಯಗಳಾಗಬಹುದು. ಅಲ್ಲಿಂದ ಈ ಎಲ್ಲಾ ಪ್ರಜ್ಞಾಪೂರ್ವಕ ರಚನಾಕೌಶಲ್ಯಗಳು ಪ್ರತಿಮೆಗಳಾಗಿ ರೂಪಕಗಳಾಗಿ ಆಧುನಿಕ ನೆಲೆಯ ಕಲಾಅಭಿವ್ಯಕ್ತಿಗಳಾಗಿ ಹೊರಹೊಮ್ಮಬಹುದು.

ಚಾರಿತ್ರಿಕವಾದ 'ಕಲಾಸಂಚಾರ'ದಲ್ಲಿ ಹೆಚ್ಚಿನವರು ಯುವಕಲಾವಿದರಿದ್ದಾರೆ. ಕಲಾಸಂಚಾರಕ್ಕೆ ಮೊದಲು ಇವರೆಲ್ಲರನ್ನೂ ಅಕಾಡೆಮಿಗೆ ಆಹ್ವಾನಿಸಿ ಕಲಾಸಂಚಾರದ ಧ್ಯೇಯ, ಉದ್ದೇಶ ಮತ್ತು ಆಶಯಗಳ ಬಗ್ಗೆ ವಿವರ ನೀಡಿ ಸಂಚಾರಕ್ಕೆ ಬೀಳ್ಕೊಟ್ಟಿದ್ದೇವೆ. ಉತ್ಸಾಹದಿಂದ ಹೊರಟು ಸಂಭ್ರಮದಿಂದ ಕಲಾರಚನೆ ಮಾಡಿ, ಹೊಸ ಚೈತನ್ಯದಿಂದ ನೂರಾರು ರೇಖಾಚಿತ್ರಗಳನ್ನು ರಚಿಸಿದ್ದಾರೆ. ಈ ಎಲ್ಲಾ ಚಿತ್ರಗಳೊಂದಿಗೆ ಬಂದ ಕಲಾವಿದರನ್ನು ಅಕಾಡೆಮಿ ಸಿಬ್ಬಂದಿ ಸಂಭ್ರಮದಿಂದಲೇ ಬರಮಾಡಿಕೊಂಡು ಅವರಿಗೆ ಪ್ರೋತ್ಸಾಹ ನೀಡಿದೆ. ಇಲ್ಲಿ ಪ್ರಕಟವಾಗಿರುವ ರೇಖಾಚಿತ್ರಗಳು 'ಕಲಾಸಂಚಾರ'ದ

ಕಲಾವಿದರ ಸಾಂಕೇತಿಕ ಚಿತ್ರಗಳು, ಇದರೊಂದಿಗೆ ಸುಮಾರು 200ಕ್ಕೂ ಹೆಚ್ಚು ರೇಖಾಚಿತ್ರಗಳು ವ್ಯವಸ್ಥಿತವಾದ ಪ್ರದರ್ಶನದ ಮೂಲಕ ಸಾರ್ವಜನಿಕರಿಗೆ ತೆರೆದುಕೊಂಡಿದೆ. ಪ್ರದರ್ಶನಕ್ಕೂ ಮೊದಲೇ ರೇಖಾಚಿತ್ರಗಳನ್ನು ಕೊಂಡುಕೊಳ್ಳಲು ಮುಂದೆ ಬಂದ ಕಲಾವಿದರು, ಕಲಾಸಕ್ತರು ನಮ್ಮ ಕಲಾಚೈತನ್ಯ. ಕೇವಲ ಒಂದು ಸಾವಿರ ರೂಪಾಯಿಗಳಿಗೆ ಒಂದು ರೇಖಾಚಿತ್ರದಂತೆ ಮಾರಾಟ ಮಾಡಿ ಬಂದ ಹಣವನ್ನು 26 ಸಾವಿರ ರೂಪಾಯಿ ಗೌರವಧನದೊಂದಿಗೆ ಕಲಾವಿದರಿಗೆ ನೀಡುತ್ತಿದ್ದೇವೆ. ಈ ಎಲ್ಲಾ ವ್ಯವಹಾರಿಕ ಬೆಳವಣಿಗೆಗಿಂತಲೂ ಈ ನಮ್ಮ ಕಲಾವಿದರು ಮತ್ತೆ ತಾವೇ ಸ್ವಂತ ಖರ್ಚಿನಲ್ಲಿ 'ಕಲಾಸಂಚಾರ' ಮಾಡುವ ಉತ್ಸಾಹ, ಇರಾದೆ ತೋರುತ್ತಿರುವುದು ಮತ್ತು ನಮ್ಮ ನೆಲದ ಸಂಸ್ಕೃತಿಯ ಬಗ್ಗೆ ಆಸಕ್ತಿ, ಕುತೂಹಲ ಹೆಚ್ಚಿಸಿಕೊಂಡಿರುವುದು ನಮ್ಮ ಲಾಭವಾಗಿದೆ. ಅಂತಾರಾಷ್ಟ್ರೀಯ ಪ್ರದರ್ಶನಗಳು, ಬೈನಾಲೆ, ಟ್ರಿನಾಲೆಗಳು, ಅಂತಾರಾಷ್ಟ್ರೀಯ ಪ್ರತಿಷ್ಠೆಯ ಪ್ರವಾಸಗಳು, ಧನಸಹಾಯಗಳು ನಮ್ಮ ಕಲಾವಿದರನ್ನು ಸೆಳೆಯುವ ಈ ಸಂದಿಗ್ಧ ಸಂದರ್ಭದಲ್ಲಿ ನೆಲಕಚ್ಚಿ, ಧೃತಿಗೆಡದೆ ಯಾವ ಅವಕಾಶಗಳಿಗೂ ಹಲುಬದೆ ತನ್ನ ಪಾಡಿಗೆ ತಾನು 'ಕಲಾಸಂಚಾರ' ಮಾಡಿದ, ಮಾಡುತ್ತಿರುವ, ಮುಂದೆ ಪಯಣಿಸುವ ನಮ್ಮ ನೆಲದ ಗ್ರಾಮೀಣ ಪ್ರತಿಭೆಗಳನ್ನು ಹೀಗೆ ಹುರಿದುಂಬಿಸುವುದು ಬಹಳ ಮುಖ್ಯ ಎಂದು ನನ್ನ ನಂಬಿಕೆ.

ಅಳಿದುಳಿದ ಸತ್ವಯುತ, ಸಾವಯವ, ರೋಗರಹಿತ ಒಂದಿಡಿ ಬಿತ್ತನೆಬೀಜಗಳನ್ನು ಅಲ್ಲಲ್ಲಿ ಒಂದೆರಡಾದರೂ ಬಿತ್ತಿದಲ್ಲಿ ಮುಂದೆ ಅದು ಮೊಳಕೆಯೊಡೆದು ಗಿಡವಾಗಿ, ಮರವಾಗಿ ಎಲ್ಲರಿಗೂ ನೆರಳಾಗಬಹುದು. ಆಗ ನೆರಳಿಗೆ ಹೊರಗೆ ಹೋಗದೆ, ಇಲ್ಲೇ ನಿರುಮ್ಮಳವಾಗಿ ಬದುಕು ಕಟ್ಟಿಕೊಳ್ಳಬಹುದು. ನಮ್ಮೊಳಗೇ ನಾವು ಸಂಚರಿಸಬಹುದು.

**ಡಾ. ಎಂ.ಎಸ್.ಮೂರ್ತಿ**
ಅಧ್ಯಕ್ಷರು
ಕರ್ನಾಟಕ ಲಲಿತಕಲಾ ಅಕಾಡೆಮಿ



## ಬೇರಿನ ದರ್ಶನ

ಕಲಾವಿದರು ಕಲ್ಪನಾವಿಲಾಸಿಗಳು, ಸಂಸ್ಕೃತಿಯ ಹರಿಕಾರರು, ಸಾಮಾಜಿಕ ಸಂಗತಿಗಳಿಗೆ ಸದಾ ಸ್ಪಂದನಶೀಲರು. ರವಿ ಕಾಣದನ್ನು ಕವಿ ಕಂಡ, ಈ ರವಿ ಮತ್ತು ಕವಿಯಿಬ್ಬರೂ ಕಾಣದನ್ನು ಕಾಣುವ, ಕಾಣಿಸುವ ಅಂತಃಶಕ್ತಿ ಮತ್ತು ಪ್ರತಿಭಾಶಕ್ತಿ ಕಲಾವಿದನ ವಿಶೇಷತೆ.

ಕಲ್ಪನೆಯ ಮೂಸೆಯಲ್ಲಿ ಅರಳಿದನ್ನು ಅನುಭವದ ನೆಲೆಯಲ್ಲಿ ಆವಾಹಿಸಿಕೊಂಡು ಅನುಭಾವದ ಬಗೆಯಲ್ಲಿ ಚಿತ್ರಿಸಿ ನೋಡುಗರಲ್ಲಿ ಅನನ್ಯ ಅನುಭೂತಿಯನ್ನುಂಟು ಮಾಡುವುದು ಕಲಾವಿದರ ಮೇಲ್ಮೆ. ಕನ್ನಡ ನಾಡಿನ ದೃಶ್ಯಕಲಾ ಪರಂಪರೆಯುದ್ದಕ್ಕೂ ಸಾವಿರಾರು ಕಲಾವಿದರು ತಮ್ಮ ಅನೂಹ್ಯ ಕಲಾಕೃತಿಗಳ ಮೂಲಕ ಅಪೂರ್ವ ಕಾಣ್ಕೆಯನ್ನು ನೀಡುತ್ತಾ ಬಂದಿರುವುದು ನಾಡಿನ ಹೆಮ್ಮೆ. ಕಲಾಸಂಸ್ಕೃತಿಯ ಕಂಪನ್ನು ಪೀಳಿಗೆಯಿಂದ ಪೀಳಿಗೆಗೆ ಪಸರಿಸುತ್ತಾ ಸಾಗುವ ಕಲಾವಿದರು ತಮ್ಮ ಪಯಣದಲ್ಲಿ ಈ ನೆಲದ ಸಂಸ್ಕೃತಿಯನ್ನೂ ಸಂರಕ್ಷಿಸಿ ಸಮೃದ್ಧಗೊಳಿಸುತ್ತಿರುವುದು ಸ್ತುತ್ಯಾರ್ಹವಾದುದು.

ಆಧುನಿಕತೆ ಬೆಳೆದಂತೆ ಎಲ್ಲಾ ಕ್ಷೇತ್ರ ಮತ್ತು ಕ್ಷೇತ್ರೀಯರಲ್ಲಿ ಹಲವು ಬದಲಾವಣೆಗಳಾಗಿರುವುದು ಸಹಜ. ಜಗದ ನಿಯಮದಂತೆ ಪ್ರತಿ ಬದಲಾವಣೆಗಳು ಘಟಿಸಿದರೂ ಈ ಸ್ಥಿತ್ಯಂತರದಲ್ಲಿ ಮೂಲಬೇರಿನ ನಂಟು ಕಳಚಬಾರದೆಂಬುದು ಸರ್ವರ ಕಳಕಳಿ. ನಾಡಿನ ಸಂಸ್ಕೃತಿ, ನಡೆ, ನುಡಿ, ಆಚಾರ, ವಿಚಾರ, ಸಂಪ್ರದಾಯಗಳು ತಲೆಮಾರಿನಿಂದ ತಲೆಮಾರಿಗೆ ದಾಟುತ್ತಾ ಹೋಗಬೇಕು. ಆಗ ಮಾತ್ರ 'ಹಳೇ ಬೇರು ಹೊಸ ಚಿಗುರು ಕೂಡಿರಲು ಮರ ಸೊಗಸು' ಎಂಬ ಕವಿವಾಣಿಗೆ ಅರ್ಥಪೂರ್ಣತೆ-ಸಾರ್ವಕಾಲಿಕತೆ. ದೃಶ್ಯಕಲಾ ಮಾಧ್ಯಮದಲ್ಲೂ ಸಾಕಷ್ಟು ಬದಲಾವಣೆಗಳಾಗಿವೆ, ಮೂರ್ತದಿಂದ ಅಮೂರ್ತ, ಸಾಂಪ್ರದಾಯಿಕ ಶೈಲಿಯಿಂದ ಆಧುನಿಕ ಶೈಲಿಯೆಡೆಗೆ ಕಲಾಪ್ರಕಾರ ಹೊರಳಿದೆ. ಹಳ್ಳಿಗಾಡಿನ ಮೂಲೆಯಲ್ಲೋ, ಪಟ್ಟಣದ ಒಂದು ತುದಿಯಲ್ಲೋ ತಣ್ಣಗೆ ಕುಳಿತು ಏಕಾಂತದಲ್ಲಿ ಕಲಾಕೃತಿಗಳನ್ನು ರಚಿಸಿ ಆತ್ಮಸಂತೋಷದಿಂದ ಜೀವನ ನಡೆಸುತ್ತಿದ್ದ ಕಲಾವಿದರು ಇಂದು ಸಾರ್ವಜನಿಕ ವಲಯದ ಬಯಲಿಗೆ ಬಂದಿದ್ದಾರೆ. ಆತ್ಮಸಂತೃಪ್ತಿಯಿಂದ ಆರ್ಥಿಕ ಸಂತೃಪ್ತಿಯೆಡೆಗೆ ಹೆಜ್ಜೆ ಇಟ್ಟಿದ್ದಾರೆ. ರಾಷ್ಟ್ರೀಯ, ಅಂತಾರಾಷ್ಟ್ರೀಯ ಮತ್ತು ರಾಜ್ಯ ಮಟ್ಟದ ಪ್ರಶಸ್ತಿಗಳ ಮೇಲೆ ಕಣ್ಣಿಟ್ಟು ಕಲಾಕೃತಿಗಳ ರಚನೆಯಲ್ಲಿ ತೊಡಗಿದ್ದಾರೆ. ಪ್ರಶಸ್ತಿ, ಪ್ರಶಸ್ತಿಯ ಮೊತ್ತ, ಅವಕಾಶಗಳ ಬೆನ್ನುಹತ್ತಿ ಅತಿ ಧಾವಂತದಲ್ಲಿ ಶರವೇಗದಲ್ಲಿ ಸಾಗಿದ್ದಾರೆ.

ಈ ತೆರನಾದ ಬೆಳವಣಿಗೆ ಅನಿರೀಕ್ಷಿತವೂ ಅಲ್ಲ, ತಪ್ಪಂತೂ ಅಲ್ಲವೇ ಅಲ್ಲ. ಬದುಕನ್ನು ಕಟ್ಟಿಕೊಡದ, ಬೆಳಗದ ಯಾವ ಕಲೆಯೂ ಪರಿಪೂರ್ಣವೂ ಅಲ್ಲ, ಅನುಕರಣೀಯವೂ ಅಲ್ಲ. ಹಾಗಂತ ಬದುಕಿಗಷ್ಟೇ ಕಲೆ ಸೀಮಿತವಾಗಬಾರದು, ವೈಯಕ್ತಿಕ ಬದುಕಿನಾಚೆಗೆ ಇಣುಕಿ ಸಾರ್ವಜನಿಕ ವಲಯದ ಉನ್ನತಿ ಮತ್ತು ಸಂಸ್ಕೃತಿಯ ಸಂರಕ್ಷಣೆಗೆ ಕಲೆ ಮುಂದಾಗಬೇಕು. ಆಗಲೇ ಕಲೆಗೆ ಸಾರ್ಥಕತೆ, ಕಲಾವಿದನಿಗೆ ಧನ್ಯತೆ.

ಭಾವಸಂಚಾರದಲ್ಲೇ ಬದುಕನ್ನು ಸವೆಸುವ ಕಲಾವಿದ ಆಧುನಿಕ ಕಲೆಯ ಜೊತೆಜೊತೆಗೆ ಸಾಂಪ್ರದಾಯಿಕ ಮತ್ತು ದೇಸಿ ಕಲೆಗಳತ್ತಲೂ ಗಮನಹರಿಸುವ ಜರೂರತ್ತು ಹಿಂದಿಗಿಂತಲೂ ಇಂದು ಹೆಚ್ಚಿದೆ. ಪಶ್ಚಿಮದ ಗಾಳಿಯಿಂದ ದೇಸಿ ಕಲೆ, ಸಂಸ್ಕೃತಿಗಳು ತರಗೆಲೆಯಂತಾಗಿರುವ ಈ ಹೊತ್ತಿನಲ್ಲಿ ನಮ್ಮ ನೆಲದ ಕಲೆ-ಸಂಸ್ಕೃತಿಯ ಬೇರನ್ನು ಮತ್ತಷ್ಟು ಗಟ್ಟಿಗೊಳಿಸಿ ಸದೃಢವಾಗಿ ಮರುಸ್ಥಾಪಿಸುವುದು ಅತ್ಯವಶ್ಯಕ. ಬಣ್ಣ, ಕ್ಯಾನ್ವಾಸ್, ಬೆಡಗು ಮತ್ತು ಬೆರಗಿಗೇ

ಮೀಸಲಾಗಿರುವ ಆಧುನಿಕ ಕಲಾಚಿಂತನೆಯು ದೇಸೀ ಕಲಾಪ್ರಕಾರ ಮತ್ತು ಸಂಸ್ಕೃತಿಯ ಸನ್ನಿಧಿಯತ್ತ ಮುಖಮಾಡಬೇಕಿದೆ. ದೃಶ್ಯಕಲೆಯ ಮೂಲ ಬೇರಾದ 'ರೇಖಾಚಿತ್ರ' ಗಳೆಡೆಗೆ ಯುವಕಲಾವಿದರನ್ನು ಸೆಳೆಯಬೇಕಾಗಿದ್ದು ಅಂತಹ ಪ್ರಯತ್ನ ಅಲ್ಲೊಂದು ಇಲ್ಲೊಂದು ನಡೆಯುತ್ತಿದೆಯಾದರೂ ಒಟ್ಟಂದದಲ್ಲಿ ಸಮರ್ಪಕವಾಗಿ ಜರುಗುತ್ತಿಲ್ಲ. ಆ ದೆಸೆಯಲ್ಲಿ ಕರ್ನಾಟಕ ಲಲಿತಕಲಾ ಅಕಾಡೆಮಿ ರೂಪಿಸಿದ ವಿನೂತನ ಯೋಜನೆ 'ಕಲಾಸಂಚಾರ' ದೃಶ್ಯಕಲಾವಿದರನ್ನು ಮೂಲಬೇರಿನತ್ತ ಕೊಂಡೊಯ್ಯುವ ಗಮನಾರ್ಹ ಬೆಳವಣಿಗೆ. ಕಲ್ಪನಾವಿಹಾರಿಗಳನ್ನು ದೇಶದ ವಿವಿಧ ಐತಿಹಾಸಿಕ ಸ್ಥಳಗಳಿಗೆ ಕಳುಹಿಸಿ ಅಲ್ಲಿನ ಶಿಲ್ಪಕಲಾ ವೈಭವವನ್ನು ಕಣ್ತುಂಬಿಕೊಳ್ಳುವುದರ ಜೊತೆಗೆ ಅದರ ಸಾರವನ್ನು 'ರೇಖೆ' ಗಳಲ್ಲಿ ಪಡಿಮೂಡಿಸಲು 'ವೇದಿಕೆ' ಒದಗಿಸುವ ಈ 'ಕಲಾಸಂಚಾರ' ವಾಸ್ತವವಾಗಿ ಸಾಂಸ್ಕೃತಿಕ ಅಧ್ಯಯನದ ಸಂಚಾರವೇ. ಸಂಸ್ಕೃತಿಯ ಸಾರ, ಕಲೆಯ ಸತ್ವವನ್ನು ಅವರವರ ಪ್ರತಿಭಾಶಕ್ತಿಗನುಗುಣವಾಗಿ ಹೀರಿಕೊಂಡು ಕುಂಚದ ಮೂಲಕ ಅಭಿವ್ಯಕ್ತಿಸಲು ಕೊಟ್ಟ ಈ ಅಪೂರ್ವ ಅವಕಾಶ ಯುವಕಲಾವಿದರನ್ನು ದೇಸಿ ಕಲೆಯಾದ ರೇಖಾಚಿತ್ರಗಳು ಮತ್ತು ದೇಸಿ ಸಂಸ್ಕೃತಿಯಾದ ಜಾನಪದ ಆಚರಣೆ-ನಡವಳಿಕೆಗಳತ್ತ ಆಸಕ್ತಿ ಸ್ಫುರಿಸುವಲ್ಲಿ ಯಶಸ್ವಿಯಾಗಿರುವುದು ಗೋಡೆ ಮೇಲಿನ ಬರಹದಷ್ಟೇ ಸತ್ಯ.

ಆ ಕಲಾಸಂಚಾರದಲ್ಲಿ ಹರವಿಕೊಂಡ ಅನುಭವ-ಅನುಭಾವದ 'ರೇಖಾ' ಚಿತ್ರಗಳ ಸಾಂಕೇತಿಕ ಕೃತಿಗಳು ಕಲಾ-ವೈಚಾರಿಕ ಸಾಹಿತ್ಯ ಚಿತ್ರ ಸಂಪುಟ-6ರಲ್ಲಿ ಅನಾವರಣಗೊಂಡಿದ್ದು ಪ್ರತಿ ಕೃತಿಯೂ ಕಲೆ-ಸಂಸ್ಕೃತಿಯ ಇತಿಹಾಸ-ಹಿರಿಮೆಯ ಕಥೆ ಹೇಳುವುದು ದಿಟ. ಆ ಸತ್ಯದ 'ದರ್ಶನ' ಈ ಕೃತಿಯ ಓದುಗರು-ನೋಡುಗರಿಗಾದರೆ ಅಕಾಡೆಮಿಯ ಶ್ರಮಕ್ಕೆ ಸಾರ್ಥಕತೆಯ ಲೇಪ. ಇಂತಹದೊಂದು ಕಾರ್ಯದಲ್ಲಿ ತೊಡಗಿಸಿದ ಅಕಾಡೆಮಿಯ ಅಧ್ಯಕ್ಷರು, ರಿಜಿಸ್ಟ್ರಾರ್ ಮತ್ತು ತುಂಬು ಸಹಕಾರವಿತ್ತ ಸಿಬ್ಬಂದಿ ವರ್ಗಕ್ಕೆ ನಾನು ಸದಾ ಆಭಾರಿ.

**ರಾಜು ಮಳವಳ್ಳಿ**
ಸಂಪಾದಕರು



## ಪರಿವಿಡಿ

## 'ಸಂಚಾರ'ದ ಕಲಾವಿದರು

- ಐಶ್ವರ್ಯನ್. ಕೆ
- ಅಕ್ಷಯಕುಮಾರ್. ವಿ.ಈ
- ಅಮರೇಶ್. ಯು. ಬಿಜ್ಜಾಳ್
- ಎಸ್.ಅನುರಾಧಸಿಂಗ್
- ಅಶೋಕ ಶಟಗಾರ
- ಅಶೋಕ್. ಯು
- ಬಸವರಾಜ. ಸಿ.ಕುತ್ನಿ
- ಬಸವರಾಜ್ ವಿಠಲರಾವ್ ಕಮಾಜಿ
- ಬಿ.ವಿ.ಸೋಮಸುಂದರಮೂರ್ತಿ
- ದಿನೇಶ್. ಬಿ
- ದಿವಾಕರ್. ಎಲ್.ಕೊಟ್ಟೂರು
- ಡಾ. ರೆಹಮಾನ್ ಪಟೇಲ್
- ಡಾ. ಶಂಕರ್ ಕುಂದಗೋಳ್
- ಗಣೇಶ ದೊಡ್ಡಮನಿ
- ಗುರುನಾಥ್ ಲಕ್ಕು ಚವ್ಹಾಣ
- ಡಾ. ಎಚ್.ವಿ.ಮಂತಟ್ಟಿ
- ಜಯವಂತ್ ಶೆಟ್ಟಿಗಾರ್
- ಕೆ.ಪಂಚಪ್ಪ
- ಕುಮಾರ್. ಎಸ್.ಕಾಟೇನಹಳ್ಳಿ
- ಕೆ.ಜಿ.ಲಿಂಗದೇವರು
- ಕೆ.ವಿ. ಶಂಕರ್
- ಲೋಕೇಶ್. ಬಿ.ಎಚ್
- ಮಧುಸೂದನ್
- ಮಹೇಂದ್ರ ಹಳವರ
- ಎಂ.ಜಿ.ದೊಡ್ಡಮನಿ
- ಎಂ.ಎನ್.ನರಸಿಂಹಮೂರ್ತಿ
- ನರಸಿಂಹಲು ಬ್ಯಾಗೇರಿ
- ಪಾಲಯ್ಯ
- ಪ್ರವೀಣ್‌ಕುಮಾರ್
- ರಾಘವೇಂದ್ರ ಹೆಚ್.ಪಾಟೀಲ್
- ರಮೇಶ್ ಚವ್ಹಾಣ
- ರಂಗನಾಥ್. ಡಿ.ಕೆ
- ರಾಣಿರೇಖಾ
- ರವಿನಾಥ್. ಪಿ.ಎಂ
- ಸಂತೋಷ್ ಅಂದಾನಿ
- ಶಂಕರ್ ಹೆಚ್.ಎ
- ಶಿವಶಂಕರ್ ಪೋಚಗುಂಡಿ
- ಸುನೀತಾ ಪಾಟೀಲ್
- ಸುರೇಂದ್ರನಾಥ್ ಡಿ.ಆರ್
- ಉದಯಕುಮಾರ್. ಬಿ
- ಉಮಾವತಿ
- ವಿ.ಅಂಜಲಿ
- ವೈಶಾಲಿಬಾಯಿ
- ವೀರಣ್ಣ ಕರಡಿ
- ವೀರೇಶ್ ಎಂ.ರುದ್ರಸ್ವಾಮಿ
- ವಿಲ್ಸನ್ ಡಿಸೋಜಾ



ಐಶ್ವರ್ಯನ್. ಕೆ



ಅಕ್ಷಯಕುಮಾರ್. ವಿ.ಈ



ಅಮರೇಶ್. ಯು. ಬಿಜ್ಜಾಳ್



ಎಸ್.ಅನುರಾಧಸಿಂಗ್



ಬಸವರಾಜ್ ವಿಠಲರಾವ್ ಕಮಾಜಿ



ಡಾ. ರೆಹಮಾನ್ ಪಟೇಲ್




ಗುರುನಾಥ್ ಲಕ್ಕು ಚವ್ಹಾಣ



ಜಯವಂತ್ ಶೆಟ್ಟಿಗಾರ್



ಕೆ.ಪಂಚಪ್ಪ




ಕುಮಾರ್. ಎಸ್.ಕಾಟೇನಹಳ್ಳಿ




ಕೆ.ಜಿ.ಲಿಂಗದೇವರು




ಕೆ.ವಿ. ಶಂಕರ್



ಲೋಕೇಶ್. ಬಿ.ಎಚ್



ನರಸಿಂಹಲು ಬ್ಯಾಗೇರಿ




ರಾಘವೇಂದ್ರ ಹೆಚ್.ಪಾಟೀಲ್



ರಮೇಶ್ ಚವ್ಹಾಣ



ರಂಗನಾಥ್. ಡಿ.ಕೆ




ರವಿನಾಥ್. ಪಿ.ಎಂ



ಶಂಕರ್ ಹೆಚ್.ಎ



ಶಿವಶಂಕರ್ ಪೋಚಗುಂಡಿ



ಸುನೀತಾ ಪಾಟೀಲ್




ಉಮಾವತಿ




ವೈಶಾಲಿಬಾಯಿ




ವೀರಣ್ಣ ಕರಡಿ



ವೀರೇಶ್ ಎಂ.ರುದ್ರಸ್ವಾಮಿ



ಕಲಾ ಸಂಚಾರಕ್ಕೆ ಹೊರಟ ಕಲಾವಿದರಿಗೆ ಆತ್ಮೀಯ ಬೀಳ್ಕೊಡುಗೆ



ಕಲಾ ಪಯಣಕ್ಕೆ ಸಜ್ಜಾಗಿರುವ ಕಲಾವಿದರು



ಅಕಾಡೆಮಿ ಅಧ್ಯಕ್ಷರಿಂದ ಕಲಾವಿದರ ರೇಖಾಚಿತ್ರಗಳ ಪರಿಶೀಲನೆ



ಕಲಾವಿದರಿಂದ ಯಶಸ್ವಿ ಕಲಾಸಂಚಾರದ ಅನುಭವಾಮೃತದ ಉಣಬಡಿಸುವಿಕೆ





ಅನುಭವ ಕಥನಗಳ ಆಲಿಸುವಲ್ಲಿ ಕಲಾವಿದರು ತಲ್ಲೀನ

